


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 10-03-2021 ಪ್ರಶ್ನೆ ಸಂಖ್ಯೆ : 145 (912)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ನಿರಾಣಿ ಹಣಮಂತ್ ರುದ್ರಪ್ಪ (ಪದವೀಧರರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 10-03-2021

ಉತ್ತರಿಸುವ ಸಚಿವರು: ಪಶುಸಂಗೋಪನೆ ಸಚಿವರು

ವಿಷಯ : ಖಾಲಿಯಿರುವ ಪಶುವೈದ್ಯರು ಮತ್ತು ಇತರೆ ಸಿಬ್ಬಂದಿಗಳನ್ನು ನೇಮಕಾತಿ ಮಾಡುವ ಬಗ್ಗೆ

(ಅ) ಪಶುಸಂಗೋಪನೆ ಇಲಾಖೆಯ ವತಿಯಿಂದ ಬೆಳಗಾವಿ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿರುವ ಪಶು ಆಸ್ಪತ್ರೆಗಳು ಹಾಗೂ ಪಶು ಚಿಕಿತ್ಸಾಲಯಗಳ ಸಂಖ್ಯೆ ಎಷ್ಟು; ಸದರಿ ಆಸ್ಪತ್ರೆಗಳಲ್ಲಿ ಪಶುವೈದ್ಯರನ್ನೊಳಗೊಂಡಂತೆ ಮಂಜೂರಾದ ಹುದ್ದೆಗಳ ಸಂಖ್ಯೆ ಎಷ್ಟು; (ತಾಲ್ಲೂಕುವಾರು, ವೃಂದವಾರು ವಿವರ ನೀಡುವುದು)

(ಆ) ಅವುಗಳಲ್ಲಿ ಖಾಯಂ, ಗುತ್ತಿಗೆ ಮತ್ತು ದಿನಗೂಲಿ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿರುವವರ ಸಂಖ್ಯೆ ಎಷ್ಟು;

(ಇ) ಪ್ರಸ್ತುತ ಖಾಲಿಯಿರುವ ಹುದ್ದೆಗಳ ಸಂಖ್ಯೆ ಎಷ್ಟು; (ತಾಲ್ಲೂಕುವಾರು, ವೃಂದವಾರು ವಿವರ ನೀಡುವುದು)

(ಈ) ಖಾಲಿಯಿರುವ ಹುದ್ದೆಗಳನ್ನು ನೇಮಕ ಮಾಡಲು ಕ್ರಮ ಕೈಗೊಳ್ಳಲಾಗಿದೆಯೇ; ಹಾಗಿದ್ದಲ್ಲಿ, ಸದರಿ ನೇಮಕಾತಿ ಪ್ರಕ್ರಿಯೆಗಳು ಪ್ರಸ್ತುತ ಯಾವ ಹಂತದಲ್ಲಿವೆ; ಮತ್ತು ಯಾವ ಕಾಲಮಿತಿಯಲ್ಲಿ ನೇಮಕಾತಿ ಪ್ರಕ್ರಿಯೆಗಳನ್ನು ಪೂರ್ಣಗೊಳಿಸಲಾಗುವುದು;

(ಉ) ಇಲ್ಲವಾದಲ್ಲಿ, ನೇಮಕಾತಿ ಮಾಡಿಕೊಳ್ಳದಿರಲು ಕಾರಣಗಳೇನು?